ಕೆ. ಅಭಿಶಂಕರ್

# ಮಧ್ಯಕಾಲೀನ 'ದಕ್ಖನ್' ಪ್ರದೇಶದಲ್ಲಿ ಭಾಷಾ ಧೋರಣೆ ಮತ್ತು ಪರಿಣಾಮ

೧೩೪೭ ರಲ್ಲಿ ಸುಲ್ತಾನ್ ಮಹಮ್ಮದ್-ಬಿನ್-ತಘಲಕ್‌ನ ವಿರುದ್ಧ ದಕ್ಷಿಣದ ಅನೇಕ ಅಮೀರರು ಬಂಡಾಯವೆದ್ದು ಅವನಿಂದ ಬೇರೆಯಾದರು. ಅವರ ನಾಯಕನಾದ ಅಲಾವುದ್ದೀನ್ ಹಸನ್ ಶಹ ಅಲ್-ಬಹಮನಿ ಕರ್ನಾಟಕದ ಕಲಬುರ್ಗಿಯಲ್ಲಿ, ಉತ್ತರ ಭಾರತದ ಹಿಡಿತದಿಂದ ಪೂರ್ಣವಾಗಿ ಸ್ವತಂತ್ರವಾದ ಸಲ್ತನತ್ ಸ್ಥಾಪಿಸಿದನು. (ವಿಜಯನಗರ ಸಾಮ್ರಾಜ್ಯ ಇದಕ್ಕೆ ಹನ್ನೊಂದು ವರ್ಷಗಳ ಮುಂಚೆಯೇ ಅಸ್ತಿತ್ವಕ್ಕೆ ಬಂದಿತ್ತು). ಅನೇಕ ಸಂದರ್ಭಗಳಲ್ಲಿ ರಾಜ್ಯಸ್ಥಾಪಕ ಸಾಹಸಿಗಳು ಭಾರತದ ಬೇರೆ ಪ್ರದೇಶಗಳಿಂದ ಬಂದಿದ್ದರೂ, ಮೂಲತಃ ಬೇರೆ ಭಾಷೆಗಳನ್ನು ಮಾತನಾಡುವವರಾಗಿದ್ದರೂ, ತಾವು ಹೊಸದಾಗಿ ಗೆದ್ದು, ನೆಲೆ ನಿಂತ ಪ್ರದೇಶದ ಭಾಷೆಯನ್ನು ತಮ್ಮದಾಗಿ ಮಾಡಿಕೊಂಡು ಅದನ್ನೇ ರಾಜಭಾಷೆಯನ್ನಾಗಿ ಉಪಯೋಗಿಸಿ, ಅಲ್ಲಿಯವರೇ ಆಗುತ್ತಿದ್ದರು. ಇದಕ್ಕೆ ಅನೇಕ ಉದಾಹರಣೆಗಳಿವೆ. ಆದರೆ ಇಲ್ಲಿ ಈಗ ಹಾಗಾಗಲಿಲ್ಲ.

ಉತ್ತರ ಭಾರತದಲ್ಲಿ ಮುಸ್ಲಿಂ ಪ್ರಭುತ್ವ ಏರ್ಪಟ್ಟು ಆಗಲೇ ನೂರು ವರ್ಷಗಳ ಮೇಲಾಗಿತ್ತು. ವಿಜಯಿ ವಿದೇಶಿ ಮುಸ್ಲಿಮರು, ತಮ್ಮಲ್ಲಿ ಬೇರೆ-ಬೇರೆ ಭಾಷೆ-ಉಪಭಾಷೆಗಳನ್ನಾಡುವವರಿದ್ದರೂ, ಮಧ್ಯಪೂರ್ವ ಏಶಿಯದಲ್ಲಿ ಅಂತರ್‌ರಾಷ್ಟ್ರೀಯ ಮಹತ್ವವನ್ನು ಗಳಿಸಿದ್ದ, ಸಾಕಷ್ಟು ಸಾಹಿತ್ಯವನ್ನು ಹೊಂದಿದ್ದ ಇರಾನಿನ ಭಾಷೆ ಫಾರಸಿಯನ್ನು ತಮ್ಮೊಡನೆ ತಂದು, ಅದನ್ನು ಉತ್ತರ ಭಾರತದಲ್ಲಿ ತಮ್ಮ ರಾಜಭಾಷೆಯನ್ನಾಗಿ ಮಾಡಿ, ದೇಶೀಯರೂ ಅದನ್ನು ಕಲಿಯಲು ಬಾಧ್ಯರನ್ನಾಗಿ ಮಾಡಿದರಷ್ಟೆ. ಹೀಗೆ ಉತ್ತರದಲ್ಲಿ ರಾಜಭಾಷೆಯಾಗಿ ವಿರಾಜಮಾನವಾಗಿ ಪ್ರತಿಷ್ಠೆಯನ್ನು ಪಡೆದಿದ್ದ, ತಮಗೆ ಚಿರ-ಪರಿಚಿತ ಫಾರಸಿಯನ್ನು ಬಹಮನಿಗಳು ದಕ್ಷಿಣದಲ್ಲೂ ತಮ್ಮ ಅಧಿಕೃತ ಭಾಷೆಯನ್ನಾಗಿ ಮಾಡಿದರು. ಮಧ್ಯಪೂರ್ವದ ವಿವಿಧ ವಿದೇಶಗಳಿಂದ ಪಶ್ಚಿಮ ಕರಾವಳಿಯ ಮೂಲಕ ನೇರವಾಗಿಯೂ ಬಹಮನಿ ರಾಜ್ಯಕ್ಕೆ ಬರುತ್ತಿದ್ದ ಸಾಹಸಿಗಳನ್ನು ಸ್ವಾಗತಿಸಿ ಅವರಿಗೆ ಅಧಿಕಾರ ಸ್ಥಾನ ಕೊಡಲಾಗುತ್ತಿತ್ತು. ಖಿಲಾಫ್ ಹಸನ್ ಅರಬ್ಬೀ, ದಿಲಾವರ್ ಖಾನ್ ಅಫಘಾನಿ, ಮಹಮೂದ್ ಗವಾನ್ ಗಿಲಾನಿ, ಕಾಸೀಮ್ ಬರೀದ್ ತುರ್ಕ್ ಮುಂತಾದವರು ಇಲ್ಲಿ ಪ್ರಧಾನಮಂತ್ರಿಗಳೇ ಆದರು. ದಕ್ಖನ್ನಿನ ಸುಲ್ತಾನರ ದರ್ಬಾರಿನಲ್ಲಿ ಕ್ರಮೇಣ ಅಫಾಖಿಗಳ ಅಂದರೆ ವಿದೇಶಿಯರ, ಡೆಕ್ಕನಿಗಳ ಮತ್ತು ಆಫ್ರಿಕದಿಂದ ತರಲ್ಪಟ್ಟು ಮೇಲ್‌ಮಟ್ಟಕ್ಕೆ ಏರಿದ ಹಬಶಿಗಳ ಗುಂಪುಗಳಿದ್ದರೂ, ಸಾಧಾರಣವಾಗಿ ವಿದೇಶಿಗಳದ್ದೇ ಪ್ರಾಬಲ್ಯವಿತ್ತು. ಇವರೆಲ್ಲರಿಗೂ ಸಾಮಾನ್ಯವಾದ ಭಾಷೆ ಫಾರಸೀ ಇಸ್ಲಾಮಿನ ಧಾರ್ಮಿಕ ಸಾಹಿತ್ಯವನ್ನೂ ಒಳಗೊಂಡು ಕುರಾನ್ ಷರೀಫದ ಅರಬ್ಬಿಯಿಂದಲೂ ಪ್ರಭಾವಿತವಾಗಿತ್ತು. ಇಷ್ಟರಲ್ಲಿ, ಭಾರತದ ವಿವಿಧ ರಾಜ್ಯಗಳ ನಡುವೆ ರಾಯಭಾರ ವ್ಯವಹಾರಗಳಿಗೂ ಫಾರಸಿಯ ಬಳಕೆಯಾಗುತ್ತ, ಅದಕ್ಕೆ ಅಂತರ್ ಪ್ರಾಂತೀಯ ಮಹತ್ವವೂ ಬಂದಿತ್ತು. ಈ ಒಟ್ಟು ಕಾರಣಗಳಿಂದ, ಮೂರು ಪ್ರೌಢ

ಫಿರೋಜನ 'ಪೀರತ್‌ನಾಮಾ', ಕುರೇಶಿಯ 'ಭೋಗ ಪಾಲ್' ಮುಂತಾದ ಕಾವ್ಯಕೃತಿಗಳು ಬರೆಯಲ್ಪಟ್ಟವು. ಸರಳ, ಪರಿಣಾಮಕಾರಿಯಾದ 'ದಕ್ಖನೀ' ಶೈಲಿ ಅವರದು. ಸುಖ, ದುಃಖ, ಆಧಾರ, ಭೋಜನ, ಪಾತಾಳ, ವಿರಾಗೀ, ಪ್ರೀತ್, ಆಕಾಸ್, ಧರತೀ, ಧರಮ್ ಮುಂತಾದ ತತ್ಸಮ, ತದ್‌ಭವ ಶಬ್ದಗಳನ್ನು ಅವರು ಬಳಸುತ್ತಿದ್ದರು. ಭಾರತೀಯ ಪರಂಪರೆಯ ಅಭಿವ್ಯಕ್ತಿ ಅವರಿಗೆ ತ್ಯಾಜ್ಯವಾಗಿರಲಿಲ್ಲ. ಅವರು ಫಾರಸೀ, ಅರಬ್ಬೀ ಶಬ್ದಗಳ ವಿಪರೀತ ಉಪಯೋಗ ಮಾಡುತ್ತಿರಲಿಲ್ಲ. ಆದಿಲ್‌ಶಾಹಿ ಮತ್ತು ಕುತುಬ್‌ಶಾಹಿ ಸುಲ್ತಾನರೂ 'ದಕ್ಖನೀ' ಸಾಹಿತ್ಯ ರಚನೆಗೆ ಪ್ರೋತ್ಸಾಹ ನೀಡಿದರು.

**ಸಂಪರ್ಕ ಭಾಷಾ ಪರಿಪಾಟ :** ದಕ್ಖನೀ ಭಾಷೆಯನ್ನು ದಕ್ಖನೀ ಹಿಂದೀ, ದಕ್ಖನೀ ಉರ್ದುವೆಂದೂ ಯಥಾರ್ಥವಾಗಿ ಕರೆಯಲಾಗಿದೆ. ಉರ್ದು, ಹಿಂದುಸ್ತಾನೀ ಹಾಗೂ ಆಧುನಿಕ ಹಿಂದೀ–ಇವುಗಳ ಮೂಲಾಧಾರವಾದ 'ಖಡೀ ಬೋಲಿ'ಯ ದಕ್ಖನೀ ರೂಪಕ್ಕೆ ಜನಪ್ರಿಯತೆ, ಶಾಸಕೀಯ ಮತ್ತು ಸಾಹಿತ್ಯಕ ಪ್ರತಿಷ್ಠೆ ಮೊದಲು ದೊರಕಿದ್ದು ಕರ್ನಾಟಕದ ಕಲಬುರ್ಗಿ, ಬಿದರೆ ಮತ್ತು ಬಿಜಾಪುರಗಳಲ್ಲಿ. ಹೀಗೆ ಈ ಸಂಪರ್ಕ ಭಾಷೆಯ ಪೋಷಣೆ ಮತ್ತು ಪ್ರಸಾರಕ್ಕೆ ಕರ್ನಾಟಕವೇ ಸಾಕು ತಾಯಿ ಎಂದು ಹೇಳಬಹುದು. ಎಲ್ಲ ದಕ್ಖನ್ ಪ್ರದೇಶ ದಲ್ಲಿ ಅಲ್ಲದೆ, ಕ್ರಮೇಣ ಅಂತರ್ ಪ್ರಾಂತೀಯ ಸಂಪರ್ಕದ ಆಡುಮಾತಾಗಿ ಸ್ವಲ್ಪಮಟ್ಟಿಗಾದರೂ ಅದರ ಉಪಯೋಗ ಉತ್ತರದಲ್ಲಿ ಗುಜರಾತ್-ಮಧ್ಯಪ್ರದೇಶದ ವರೆಗೂ, ಸುದೂರ ದಕ್ಷಿಣಕ್ಕೂ ಹರಡಿತು. ೧೭ನೆಯ ಶತಮಾನದ ಕೊನೆಯ ಭಾಗದಲ್ಲಿ ದಕ್ಷಿಣ ಭಾರತದ ಬಹುಭಾಗ ಮೊಗಲರ ಕೈವಶವಾಗ ಹೈದರಾಬಾದ್ ಅವರ ಮುಖ್ಯ ಕೇಂದ್ರವಾಯಿತು. ಬಳಿಕ ಸಂಸ್ಕೃತ ತತ್ಸಮ ಶಬ್ದಗಳನ್ನು ಪೂರ್ಣ ಬಿಟ್ಟು, ತದ್ಭವಗಳ ಬಳಕೆಯನ್ನೂ ಅತ್ಯಂತ ಕಡಿಮೆ ಮಾಡಿ, ವಿಪುಲವಾಗಿ ಫಾರಸಿ-ಅರಬ್ಬೀ ಶಬ್ದಗಳನ್ನು ಉಪಯೋಗಿಸುವ ಖಡೀ ಬೋಲಿಯ ಆಧಾರದ ಉರ್ದುವಿನಲ್ಲಿ ಸಾಹಿತ್ಯಕ ಕೃಷಿ ಉತ್ತರದಲ್ಲಿ ಪ್ರಾರಂಭವಾಗಿ ದಕ್ಖನ್ ಪ್ರದೇಶಕ್ಕೂ ಹರಡಿತು. ಆಗ ದಕ್ಖನೀ ಸಾಹಿತ್ಯ ರಚನೆಗೆ ಪ್ರೋತ್ಸಾಹ ಕಡಿಮೆಯಾಯಿತು. ಆದರೂ ಹೈದರಾಬಾದಿನ ಲಾಲಾ ಮೋಹನ್‌ಲಾಲ್ 'ಮೆಹತಾಬ್', ಲಕ್ಷ್ಮೀನಾರಾಯಣ 'ಶಫೀಕ್' ಮುಂತಾದವರು ದಕ್ಖನಿಯಲ್ಲಿ ಸಾಹಿತ್ಯರಚನೆ ಮಾಡಿದರು. ಉತ್ತರ ಭಾರತದಿಂದ ಬಂದ ವಂಶ ಪಾರಂಪರ್ಯವಾಗಿ ದಕ್ಖನ್ ಪ್ರದೇಶದಲ್ಲಿ ಸರಕಾರದ ಆಶ್ರಯದಲ್ಲಿದ್ದ ಕಾಯಸ್ಥರು, ರಜಪೂತರು ಮುಂತಾದವರಿಗೂ ಈ ಭಾಷೆ ಹಾಸು–ಹೊಕ್ಕಾಗಿತ್ತು. ದಕ್ಷಿಣದ 'ಮೊಗಲಾಯಿ' ಭಾಗದಲ್ಲಿ ವಿವಿಧ ಭಾಷಾ ಗುಂಪುಗಳ ಮಧ್ಯೆ ದೇಶೀ ಸಂಪರ್ಕ ಭಾಷಾ ಉಪಯೋಗದ ರೂಢಿ ಆಧುನಿಕ ಕಾಲದವರೆಗೂ ನಡೆದುಬಂದಿದೆ. ಹೈದರಾಬಾದಿನ ಈ ಆಸಫ್ ಜಾಹಿ ರಾಜ್ಯದಲ್ಲಿ ೧೮೮೪ರ ವರೆಗೂ ಫಾರಸೀ ಸರಕಾರೀ ಭಾಷೆಯಾಗಿದ್ದು, ಆ ವರ್ಷ ಉರ್ದು ಸರಕಾರಿ ಭಾಷೆಯೆಂದು ಘೋಷಿತವಾಯಿತು. ಈಸ್ಟ್ ಇಂಡಿಯಾ ಕಂಪನಿ ಸರ್ಕಾರವೂ ೧೮೩೦ರ ವರೆಗೂ ಫಾರಸೀ ಭಾಷೆಯನ್ನು ಇತರ ರಾಜ್ಯಗಳೊಡನೆ ನಡೆಸುತ್ತಿದ್ದ ವ್ಯವಹಾರದಲ್ಲಿ ಬಳಸುತ್ತಿತ್ತು. ಮೈಸೂರು ಸಂಸ್ಥಾನದಲ್ಲೂ ಇಂತಹ ವ್ಯವಸ್ಥೆ ಕೆಲ ಕಾಲ ಇದ್ದಿತು.

**ಭಾಷೆಗೆ ಪರಿವರ್ತನೆ :** ಈ ಕಾಲಾವಧಿಯಲ್ಲಿ ಆ ದಕ್ಖನ್ ಪ್ರದೇಶದಲ್ಲಿ ಸ್ಥಳೀಯರ ಮತಾಂತರವೂ ನಿರಂತರವಾಗಿ ಹೆಚ್ಚು ನಡೆದಿತ್ತಷ್ಟೆ. ವ್ಯಕ್ತಿಗಳ ಅಥವಾ ಪರಿವಾರಗಳ ಧಾರ್ಮಿಕ ಪರಿವರ್ತನೆಯಾದ ಬಳಿಕ ಬಹುತೇಕವಾಗಿ ಭಾಷಾ ಪರಿವರ್ತನೆಯೂ ಆಗುವ ವಾಡಿಕೆ ಈ ಭಾಗಗಳಲ್ಲಿ ನಡೆದು ಬಂದಿದೆ. ಒಂದು ಸಾಮಾನ್ಯ ಸಂಪರ್ಕ ಭಾಷೆ ('ದಕ್ಖನೀ') ಪ್ರಸಾರದಲ್ಲಿತ್ತಾದ್ದರಿಂದ ಇದು ಕಷ್ಟಸಾಧ್ಯವೂ ಆಗಿರಲಿಲ್ಲ. ಅಲ್ಲಿ ನಿರ್ಲಕ್ಷಿಸಲ್ಪಟ್ಟಿದ್ದ ಪ್ರಾದೇಶಿಕ ಭಾಷೆಗಳಿಗೆ ಮಹತ್ವವೇ ಉಳಿದಿರಲಿಲ್ಲ. ಶಾಸಕವರ್ಗದ ಭಾಷೆಯನ್ನು ಮನೆಮಾತಾಗಿಯೂ ಸ್ವೀಕರಿಸುವುದರಿಂದ ತಮ್ಮ ಹೊಸ ಮತದ ಸಮಾಜದಲ್ಲಿ ಕೂಡಲೇ ಬೆರೆಯುವುದು, ಸ್ಥಾನಮಾನ ಪಡೆಯುವುದು ಸುಗಮವಾಗುತ್ತಿತ್ತು. ಹೀಗೆ ಭಾಷೆಗೆ ಪರಿವರ್ತನೆ ಆಗುವ ಅಂದರೆ ಒಟ್ಟು ಸಮಾಜಾಂತರ ಆಗುವ ಪ್ರಕ್ರಿಯೆ ವಿಶೇಷತಃ ಕರ್ನಾಟಕ, ಆಂಧ್ರ ಮತ್ತು ಮಹಾರಾಷ್ಟ್ರ– ಈ ಮೂರು ಪ್ರದೇಶಗಳಲ್ಲಿ ಮಾತ್ರವೇ ಕಂಡುಬಂದಿದೆ. ಭಾರತದ ಇತರ ಪ್ರದೇಶಗಳಲ್ಲಿ ಇಷ್ಟು ಪ್ರಮಾಣದಲ್ಲಿಯಂತೂ ಅದು ನಡೆದಿಲ್ಲ. ಬಂಗಾಳ, ಕಾಶ್ಮೀರ, ಪಂಜಾಬ್, ಗುಜರಾತ್, ತಮಿಳುನಾಡು, ಕೇರಳ ಮುಂತಾದ ಪ್ರಾಂತಗಳಲ್ಲಿ ಮುಸ್ಲಿಮರ ಮನೆಮಾತು ಮತ್ತು ಸಾಮಾಜಿಕ ಭಾಷೆ ಆ ಪ್ರದೇಶಗಳದ್ದೇ ಆಗಿವೆ.

ಆದರೆ ದಕ್ಷಿಣದ ಈ ಮೂರು ಪ್ರದೇಶಗಳಲ್ಲಿ ಮಾತ್ರವೇ ಬೇರೊಂದು ಭಾಷೆ ('ದಕ್ಖನೀ' ತರುವಾಯ ಉರ್ದು) ಬಹುತೇಕ ಮಂದಿ ಮುಸ್ಲಿಮರ ಭಾಷೆಯಾಗಿ ಸ್ವೀಕರಿಸಲ್ಪಟ್ಟಿದೆ.

ದಕ್ಖನ್ ಪ್ರದೇಶವನ್ನು ಗೆದ್ದು ಅಲ್ಲಿ ರಾಜ್ಯ ವಿಸ್ತರಣೆಯಲ್ಲಿ ತೊಡಗಿದ್ದವರ ಆಕ್ರಮಣಕ್ಕೆ ತೀವ್ರ ಪ್ರತಿಭಟನೆ ವಿಜಯನಗರದ ಮೂಲಕ, ತದನಂತರ ಮರಾಠರ ಮೂಲಕ ಏರ್ಪಟ್ಟಿತ್ತಷ್ಟೆ. ಘರ್ಷಣೆಗಳು, ಯುದ್ಧಗಳು ಪುನಃ ಪುನಃ ನಡೆಯುತ್ತ, ದಕ್ಖನ್ ಪ್ರದೇಶದ ಮುಸ್ಲಿಂ ಆಳುವ ವರ್ಗದಲ್ಲಿ ಅಸ್ಥಿರ ಭಾವನೆ ಇದ್ದಿತು. ಇಂತಹ ವಿಶೇಷ ಪರಿಸ್ಥಿತಿಯಲ್ಲಿ ತಮ್ಮ ಸಾಮಾಜಿಕ ಸಂಘಟನೆಯನ್ನು ಸಾಧ್ಯವಾದಷ್ಟು ಬಲಪಡಿಸಿಕೊಳ್ಳುವ ದೃಷ್ಟಿಯಿಂದ, ಸ್ಥಳೀಯರು ಶಾಸಕ ವರ್ಗದ ಧರ್ಮಕ್ಕೆ ಪರಿವರ್ತನೆಗೊಂಡಾಗ, ಬಹುತೇಕವಾಗಿ ಅವರ ಭಾಷೆಗೂ ಪರಿವರ್ತಿತರಾಗಿ ಅವರೊಡನೆ ಏಕೀಭವಿಸುವುದು ರೂಢಿಗೆ ಬಂದಂತೆ ತೋರುತ್ತದೆ. ಇದೊಂದು ಅಸಾಮಾನ್ಯವಾದ ಪರಿಪಾಟ.

**ಇತರ ಫಲಿತಾಂಶಗಳು :** ದಕ್ಖನ್ನಿನ ಆ ಭಾಗಗಳಲ್ಲಿ ಆದ ಇನ್ನೊಂದು ಮುಖ್ಯ ಪರಿಣಾಮವೆಂದರೆ, ಅಲ್ಲಿನ ಮೂರು ಪ್ರಾದೇಶಿಕ ಭಾಷೆಗಳು ಕಡೆಗಣಿಸಲ್ಪಟ್ಟು, ಅವಕ್ಕೆ ಉತ್ತೇಜನವಿಲ್ಲದೆ, ಅವುಗಳ ಕೃಷಿ, ಪ್ರಗತಿ ಅಲ್ಲಿ ಅತೀವ ಕುಂಠಿತವಾಗಿ, ಅವುಗಳ ಉಳಿವೇ ಅಲ್ಲಿ ದುಸ್ತರವಾಗಿತ್ತು.

ಶತಮಾನಗಳವರೆಗೆ ಸರಕಾರಗಳ ಪ್ರಬಲ ಬೆಂಬಲ, ಪೋಷಣೆ, ಎಲ್ಲ ಸೌಲಭ್ಯಗಳನ್ನು, ಮಹತ್ವವನ್ನು ಪಡೆದಿದ್ದ ವಿದೇಶಿ ಭಾಷೆ ಫಾರಸೀ ಸರಕಾರೀ ಭಾಷೆಯಾಗಿದ್ದರೂ, ಒಂದು ಪ್ರತಿಷ್ಠಿತ ಪಂಗಡದ, ಶಾಸಕರ ಮಾತೃಭಾಷೆಯಾಗಿದ್ದರೂ, ಕ್ರಮೇಣ ಅದು ಯಾರ ಮಾತೃಭಾಷೆಯಾಗಿಯೂ, ಸಾಮಾಜಿಕ ಭಾಷೆಯಾಗಿಯೂ ಅಥವಾ ಸರಕಾರದ ಭಾಷೆಯಾಗಿಯೂ ಉಳಿಯಲಿಲ್ಲ. ಅದಕ್ಕೆ ಬದಲಾಗಿ, ವಿವಿಧ ಗುಂಪುಗಳ ಆಡುಮಾತು, ಸಂಪರ್ಕ ಭಾಷೆ ಆಗಿದ್ದ 'ದಕ್ಖನೀ' ಅವರೆಲ್ಲರಿಗೆ ಅಂದರೆ ಫಾರಸೀ, ಅರಬ್ಬೀ, ತುರ್ಕಿ, ಪುಷ್ತೊ, ಹಬಶಿ ಮುಂತಾದ ಎಲ್ಲ ವಿದೇಶೀ ವಂಶಸ್ಥರಿಗೂ ಸಹ ಮಾತೃಭಾಷೆಯಾಯಿತು. ಆದರೆ, ಕ್ರಮೇಣ, ಬಹಳಷ್ಟು ಫಾರಸೀ–ಅರಬ್ಬೀ ಶಬ್ದಗಳನ್ನು ಉಪಯೋಗಿಸುವ, ಫಾರಸೀ ಲಿಪಿಯಲ್ಲಿ ಬರೆಯಲ್ಪಡುವ ಉರ್ದುವನ್ನು ಅವರು ಮತ್ತು ಇತರ ಅನೇಕರು ತಮ್ಮ ಮನೆಯ ಮತ್ತು ಸಾಮಾಜಿಕ ಭಾಷೆಯನ್ನಾಗಿ ಮಾಡಿಕೊಂಡರು. ದಕ್ಷಿಣದ ಮೂರು ಪ್ರದೇಶಗಳಲ್ಲಿ ವಿವಿಧ ಭಾಷೆಗಳ ಪರಸ್ಪರ ಸಂಪರ್ಕದಿಂದ ಭಾಷಿಕ ಮತ್ತು ಸಾಂಸ್ಕೃತಿಕ ಆದಾನ–ಪ್ರದಾನವಾಯಿತು. ಅಂತರ್–ಪ್ರಾಂತೀಯ ಸಂಬಂಧಕ್ಕೆ ಒಂದು ದೇಶೀ ಸಂಪರ್ಕ ಭಾಷೆಯು ಬಳಕೆ ರೂಢಿಗೆ ಬಂದಿತು.

### ಕೆಲವು ಸಹಾಯಕ ಗ್ರಂಥಗಳು


ಡಾ॥ ಬಾಬೂರಾಮ್ ಸಕ್ಸೇನ : ದಕ್ಖನೀ ಹಿಂದೀ, ಅಲಹಾಬಾದ್, ೧೯೫೨

ಡಾ॥ ಶ್ರೀರಾಮ ಶರ್ಮಾ : ದಕ್ಖನೀ ಹಿಂದೀಕಾ ಸಾಹಿತ್ಯ, ಹೈದರಾಬಾದ್, ೧೯೭೨

ರಾಜನಾಥ ಶರ್ಮಾ : ಹಿಂದೀ ಭಾಷಾಕಾ ಇತಿಹಾಸ, ಆಗ್ರಾ, ೧೯೫೬

ಮಹಾವೀರ ಪ್ರಸಾದ ದ್ವಿವೇದಿ : ಹಿಂದೀ ಭಾಷಾಕೀ ಉತ್ಪತ್ತಿ

Sayed Mohammed : The Value of Dakhni Language and Literature, Mysore, 1968

H. K. Sherwani : The Bahmanis of the Deccan, Hyderabad, 1953

H. K. Sherwani : The Bahamani Kingdom, Bombay, 1947

K. Abhishankar (Ed.) : Bidar District Gazetteer, Bangalore, 1977